ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಸರ್ಕಾರದ ವಿವಿಧ ಇಲಾಖೆಗಳಲ್ಲಿ ನೌಕರರ ಕಾರ್ಯಕ್ಷಮತೆ ಹೆಚ್ಚಿಸಲು ತರಬೇತಿ ಅವಶ್ಯಕತೆ ಬಗ್ಗೆ

ಶ್ರೀ ಕೆ. ಗೋವಿಂದರಾಜ್(ವಿಧಾನಸಭೆಯಿಂದ ಚುನಾಯಿತರಾದವರು) –

448 (609) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಇತ್ತೀಚೆಗೆ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ಮತ್ತು ಅಧಿಕಾರಿಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ಒದಗಿಸಲಾಗದಿರುವ ಅಂಶವನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆಯೇ; (ಮಾಹಿತಿ ಒದಗಿಸುವುದು)

(ಆ) ಕಳೆದ 3 ವರ್ಷಗಳ ಅವಧಿಯಲ್ಲಿ ಯಾವ ಯಾವ ಇಲಾಖೆಗಳಲ್ಲಿ ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಗಿದೆ; (ಇಲಾಖಾವಾರು, ವರ್ಷಾವಾರು, ನೀಡಲಾದ ತರಬೇತಿ, ತರಬೇತಿ ಅವಧಿ, ವಿನಿಯೋಗಿಸಲಾದ ಅನುದಾನ, ಭಾಗವಹಿಸಿದ ಸಿಬ್ಬಂದಿ/ಅಧಿಕಾರಿಗಳ ಸಂಖ್ಯೆ. ತರಬೇತಿ ವಿಷಯ ಕುರಿತಾಗಿ ಪ್ರತ್ಯೇಕವಾದ ಸಂಪೂರ್ಣ ಮಾಹಿತಿಯನ್ನು ಒದಗಿಸುವುದು)

(ಇ) ಹಲವಾರು ಇಲಾಖೆಗಳು ಇತ್ತೀಚಿನ ದಿನಗಳಲ್ಲಿ ಗಣಕೀಕೃತಗೊಂಡು ಕಾರ್ಯನಿರ್ವಹಿಸುತ್ತಿದ್ದು, ವಿವಿಧ ರೀತಿಯಲ್ಲಿ ಸಿಬ್ಬಂದಿ ಅಧಿಕಾರಿಗಳಿಗೆ ತರಬೇತಿ ಅವಶ್ಯವಿದ್ದರೂ ಈ ನಿಟ್ಟಿನಲ್ಲಿ ಸರ್ಕಾರ ಉದಾಸೀನ ತೋರುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳು ಏನು; (ಮಾಹಿತಿ ಒದಗಿಸುವುದು)

(ಈ) ಪ್ರತಿ ನೌಕರನಿಗೂ ಅವನ ಹುದ್ದೆ ನಿರ್ವಹಣೆಗೆ ಅವಶ್ಯಕವಾದ ತರಬೇತಿ, ಪುನರ್ ಮನನದಂತಹ ಕಾರ್ಯಕ್ರಮಗಳನ್ನು ಕಡ್ಡಾಯಗೊಳಿಸಿ ಕಾರ್ಯಕ್ಷಮತೆ ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರದ ಕ್ರಮಗಳ ಕುರಿತಾಗಿ ಮಾಹಿತಿ ಒದಗಿಸುವುದು?